ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ತುಮಕೂರು ಬ್ರಾಂಚ್ ಕೆನಾಲ್ ಕಾಮಗಾರಿ ಕುರಿತು

ಶ್ರೀ ಎಂ. ಎ. ಗೋಪಾಲಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

50 (526) ಜಲಸಂಪನ್ಮೂಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಕಾವೇರಿ ನೀರಾವರಿ ನಿಗಮದ ವತಿಯಿಂದ ಕೈಗೊಳ್ಳಲಾಗುತ್ತಿರುವ ಬಾಗೂರು ನವಿಲೆ ಟನಲ್‌ನಿಂದ ಗುಬ್ಬಿವರೆಗಿನ ತುಮಕೂರು ಬ್ರಾಂಚ್ ಕೆನಾಲ್ ಕಾಮಗಾರಿಯು ಎಷ್ಟು ಕಿಲೋಮೀಟರ್‌ಗಳದ್ದಾಗಿದೆ; ಈ ಕಾಮಗಾರಿಯ ಅಂದಾಜು ಮೊತ್ತವೆಷ್ಟು; ಗುತ್ತಿಗೆದಾರರ ವಿವರಗಳೇನು; (ಸಂಪೂರ್ಣ ಮಾಹಿತಿ ನೀಡುವುದು)

(ಆ) ಬಾಗೂರು ನವಿಲೆ ಟನಲ್‌ನಿಂದ ಗುಬ್ಬಿವರೆಗಿನ ತುಮಕೂರು ಬ್ರಾಂಚ್ ಕೆನಾಲ್‌ನ ಎಷ್ಟು ಕಿಲೋಮೀಟರ್ ಕಾಮಗಾರಿ ಪೂರ್ಣಗೊಂಡಿದೆ ಮತ್ತು ಎಷ್ಟು ಕಿಲೋಮೀಟರ್ ಕಾಮಗಾರಿ ಬಾಕಿ ಉಳಿದಿದೆ; ಪೂರ್ಣಗೊಂಡಿರುವ ಕಾಮಗಾರಿ ಬಿಲ್‌ಗಳಿಗೆ ಎಷ್ಟು ಮೊತ್ತ ಬಿಡುಗಡೆ ಮಾಡಲಾಗಿದೆ; (ವಿವರ ನೀಡುವುದು)

(ಇ) ಈ ಕಾಮಗಾರಿಯ ಟೆಂಡರ್ ನಿಯಮಗಳಲ್ಲಿ ಬ್ಯಾಕ್ ಫಿಲ್ಲಿಂಗ್‌ಗೆ ಬಳಸಲು ನಿಗದಿಪಡಿಸಿರುವ ಗ್ರಾವೆಲ್ ಪ್ರಮಾಣವೆಷ್ಟು; ಲೀಡ್ ಪ್ರಮಾಣವೆಷ್ಟು; ಹರ್ಡ್‌ರಾಕ್ ಪ್ರಮಾಣವೆಷ್ಟು; ಯು. ಸಿ. ಆರ್. ಪ್ರಮಾಣವೆಷ್ಟು; (ಸಂಪೂರ್ಣ ವಿವರ ನೀಡುವುದು)

(ಈ) ಈ ಕಾಮಗಾರಿಯಲ್ಲಿ ಬಳಸಿರುವ ಗ್ರಾವೆಲ್ ಪ್ರಮಾಣವೆಷ್ಟು; ಲೀಡ್ ಪ್ರಮಾಣವೆಷ್ಟು; ಹರ್ಡ್‌ರಾಕ್ ಪ್ರಮಾಣವೆಷ್ಟು; ಯು. ಸಿ. ಆರ್. ಪ್ರಮಾಣವೆಷ್ಟು ಮತ್ತು ಬ್ಯಾಕ್ ಫಿಲ್ಲಿಂಗ್‌ಗೆ ಬಳಸಿರುವ ಇತರೆ ಸಾಮಾಗ್ರಿಗಳ ಪ್ರಮಾಣವೇನು; (ಸಂಪೂರ್ಣ ವಿವರ ನೀಡುವುದು)

(ಉ) ಈ ಕಾಮಗಾರಿಯ ಅಂದಾಜು ಪಟ್ಟಿಯಲ್ಲಿ ಸೂಚಿಸಿದಂತೆ ಕಾಮಗಾರಿಗಳನ್ನು ನಿರ್ವಹಿಸದೆ ಗುತ್ತಿಗೆದಾರರು ಭಾರಿ ಪ್ರಮಾಣದ ವ್ಯತ್ಯಾಸಗಳನ್ನು ಮಾಡಿ ಸರ್ಕಾರಕ್ಕೆ ನಷ್ಟ ಉಂಟು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರಕ್ಕೆ ಉಂಟು ಮಾಡಿರುವ ನಷ್ಟದ ವಿವರಗಳೇನು? (ಸಂಪೂರ್ಣ ಮಾಹಿತಿ ನೀಡುವುದು)